ಗಣಪತಿಗೌಡ

# ಸಿದ್ದಾಪುರ : ಇತ್ತೀಚಿನ ಕೆಲವು ಪುರಾತತ್ವಶೋಧನೆಗಳು

ಸಿದ್ದಾಪುರವು ಉತ್ತರಕನ್ನಡ ಜಿಲ್ಲೆಯ ಒಂದು ತಾಲ್ಲೂಕು. ಸಮೃದ್ಧ ಪುರಾತತ್ವ ಅವಶೇಷಗಳನ್ನು ಹೊಂದಿರುವ ಈ ಜಿಲ್ಲೆ ಇತಿಹಾಸಕಾರರಿಗೆ ಅನೇಕ ವಿಷಯಗಳನ್ನು ಒದಗಿಸಬಲ್ಲದು. ನಾನು ಕೈಗೊಂಡ ಅನ್ವೇಷಣೆಯ ಸಮಯದಲ್ಲಿ ಇಲ್ಲಿಯ ಸುಮಾರು, 15 ಬೇರೆ ಬೇರೆ ಸ್ಥಳಗಳಿಗೆ ಭೆಟ್ಟಿಕೊಟ್ಟು ಅಲ್ಲಿಯ ಅವಶೇಷಗಳನ್ನು ತಕ್ಕಮಟ್ಟಿಗೆ ಕ್ರೋಢೀಕರಿಸಿ ಈ ಪ್ರಬಂಧದಲ್ಲಿ ವಿವರಸಿದ್ದೇನೆ. ಅವುಗಳೆಂದರೆ:

1. ಇತಿಹಾಸ ಪೂರ್ವಕಾಲದ ಅವಶೇಷಗಳು. 2. ಐತಿಹಾಸಿಕ ಅವಶೇಷಗಳು 3. ವಾಸ್ತು ಶಿಲ್ಪಕ್ಕೆ ಸಂಬಂಧಪಟ್ಟಂತಹಅವಶೇಷಗಳು; ಇವುಗಳನ್ನು ಕ್ರಮವಾಗಿ ಈ ಕೆಳಗಿನಂತೆ ವಿಂಗಡಿಸಬಹುದು: ಅ) ಇತಿಹಾಸಪೂರ್ವಕಾಲಕ್ಕೆ ಸೇರಿದ್ದೆನ್ನಬಹುದಾದ ಶಿರಳಗಿಯ ಬೃಹತ್‌ಶಿಲಾ ಸಂಸ್ಕೃತಿಯ ಅವಶೇಷಗಳು ಬ) ಬೆಳ್ಳಟ್ಟಿಯಲ್ಲಿ ದೊರೆತ ಹಾನಗಲ್ ಕದಂಬರ ಹೊಸ ಶಿಲಾಶಾಸನ ಕ) ಸುಮಾರು ಕ್ರಿಶ 6-7, 9-10, 15-17ನೇ ಶತಮಾನಕ್ಕೆ ಸೇರ ಬಹುದಾದ ಮೂರ್ತಿ ಮತ್ತು ವಾಸ್ತುಶಿಲ್ಪಗಳು

**ಶಿರಳಗಿಯ ಅವಶೇಷಗಳು:** ಶಿರಳಗಿಯು ಸಿದ್ದಾಪುರ ತಾಲೂಕಿನಿಂದ ಸುಮಾರು 5 ಕಿ.ಮಿ. ದೂರದಲ್ಲಿರುವ ಒಂದು ಹಳ್ಳಿ. ಸಿದ್ದಾಪುರ ದಿಂದ ಚಂದ್ರಗುತ್ತಿಗೆ ಹೋಗುವ ರಸ್ತೆಯು ಶಿರಳಗಿಯ ಮಧ್ಯೆ ಹಾದು ಹೋಗುತ್ತದೆ. ದಿಬ್ಬದಂತಿರುವ ಈ ಶಿರಳಗಿಯನ್ನು ರಸ್ತೆಯ ಇಬ್ಬಾಗ ಮಾಡಿದ್ದರಿಂದ ರಸ್ತೆಯ ಎರಡು ಪಕ್ಕಗಳ ಸ್ತರದಲ್ಲಿ ಅನೇಕ ಮಡಿಕೆ ಚೂರುಗಳು ಇರುವದು ನನ್ನ ಗಮನಕ್ಕೆ ಬಂದಿತು. ಇಂತಹ ಅನೇಕ ಮಡಿಕೆ ಚೂರುಗಳು ನೆಲದ ಮೇಲಿನಿಂದ ಸುಮಾರು 51/2 ಅಡಿ ಆಳದವರೆಗೆ ದೊರೆತಿವೆ. ಇಲ್ಲಿಯೇ ಹತ್ತಿರ ಸುಮಾರು 100 ಅಡಿ ಅಂತರದಲ್ಲಿ 'ಹೊಗೆ ಕುಣಿ' ಎಂದು ಕರೆಯುವ ಜಂಬಿ ಟ್ಟಿಗೆ ಬೇಣದಲ್ಲಿ ಹಂಡೆಯಾಕಾರದಲ್ಲಿ ಕೊರೆದ ಒಂದು ಕುಣಿ ಇದೆ. ಇಂತಹ ಅನೇಕ ಕುಣಿಗಳು ಬೃಹತ್ ಶಿಲಾ ಸಂಸ್ಕೃತಿಗೆ ಸಂಬಂಧಿಸಿದ್ದೆಂದು ಈಗಾಗಲೇ ಬೇರೆ ಕಡೆಗಳಲ್ಲಿ ಗುರುತಿಸಲಾಗಿದೆ. ಉದಾ: ದಕ್ಷಿಣ ಕನ್ನಡದಲ್ಲಿ ಹಿರಿಯಡಕವೆಂದು, ಉತ್ತರ ಕನ್ನಡದ ಕೆಲವು ಭಾಗದಲ್ಲಿ 'ಕೊಟ್ಟ' ಎಂದು ಕರೆಯಲಾಗುವ ಕುಣಿಗಳೂ ಬೃಹತ್ ಶಿಲಾಯುಗಕ್ಕೆ ಸಂಬಂದಿಸಿರಬಹುದೆಂದು ತಜ್ಞರು ಅಭಿಪ್ರಾಯ ಪಟ್ಟಿದ್ದಾರೆ.

ಇಲ್ಲಿ ದೊರೆತ ಮಡಿಕೆ ಚೂರುಗಳಲ್ಲಿ ಮುಖ್ಯವಾಗಿ ಮಧ್ಯಕಾಲೀನ ಇತಿಹಾಸ ಹಾಗೂ ಬೃಹತ್ ಶಿಲಾ ಸಂಸ್ಕೃತಿಗೆ ಸಂಬಂಧಪಟ್ಟಂತಹ ಅವಶೇಷಗಳೆಂದು ವಿಭಾಗಿಸಬಹುದು. ಇಂತಹ ಮಡಿಕೆ ಚೂರುಗಳು ಈಗ ದೊರೆತಿರವ ಸ್ತರಗಳಿಗಿಂತ ಕೆಳಗಡೆಯೂ ಸಿಗತ್ತವೆಂದು ಸ್ಥಳಿಕರು ತಿಳಿಸುತ್ತಾರೆ. ಇಲ್ಲಿಯೇ ಸ್ವಲ್ಪ ದೂರದಲ್ಲಿ ಅರಣ್ಯದಿಂದಾವೃತ್ತವಾದ ಪ್ರದೇಶವನ್ನು ಅಗೆದಾಗ ಇಲ್ಲಿಯೂ ಕೂಡ ಹೇರಳವಾಗಿ ಮಡಿಕೆ ಚೂರುಗಳು ದೊರೆತಿವೆ.

ಈ ಮೇಲೆ ದೊರೆತ ಪುರಾತತ್ವ ಅವಶೇಷಗಳಿಂದ ಬೃಹತ್ ಶಿಲಾ ಸಂಸ್ಕೃತಿಗೆ ಸಂಬಂಧಪಟ್ಟ ಜನರು ಈ ಪ್ರದೇಶದಲ್ಲಿ ನೆಲೆಸಿದ್ದರೆಂದು ಖಚಿತವಾಗಿ ಹೇಳಬಹುದು ನಂತರ ಬಂದ ಮಧ್ಯಕಾಲೀನ ಜನರು ತಮ್ಮ ವಾಸಸ್ಥಳಕ್ಕೆ ಈ ಪ್ರದೇಶವನ್ನು ಆಯ್ದುಕೊಂಡು ಕ್ರಮೇಣ ಅವಶ್ಯವಿದ್ದಲ್ಲಿ ಅಗೆಯಲು ಪ್ರಾರಂಭಿಸಿದರು. ಇದರಿಂದ ಮಧ್ಯಕಾಲೀನ ಜನರು ಉಪಯೋಗಿಸುತ್ತಿದ್ದ ಮಡಿಕೆ-ಕುಡಿಕೆಗಳು ಬೃಹತ್ ಶಿಲಾ ಸಂಸ್ಕೃತಿಯ ಅವ ಶೇಷದೊಂದಿಗೆ ಬೆರೆತವು.

ಈಗಾಗಲೇ ಡಾ॥ ರಘುನಾಥ ಭಟ್ಟರು ಶಿರಳಿಗೆ ಸಮೀಪದ ಕಿಲಾರೆಯೆಂಬಲ್ಲಿ ಬೃಹತ್ ಶಿಲಾ ಸಂಸ್ಕೃತಿಗೆ ಸಂಬಂಧಿಸಿದ ಮಡಿಕೆ ಚೂರುಗಳನ್ನು ಅಲ್ಲಿಯ ಕೊಟ್ಟ ದಲ್ಲಿ ಶೋಧಿಸಿದ್ದಾರೆ. ಹಾಗೆಯೇ ಡಾ॥ ಎಸ್.ವ್ಹಿ. ಪಾಡಿಗಾರ ಮತ್ತು ಕಲ್ಲೂರ ಇವರು ಬೃಹತ್ ಶಿಲಾ ಸಂಸ್ಕೃತಿಗೆ ಸೇರಬಹುದಾದ ಅವಶೇಷಗಳನ್ನು ದಾಂಡೇಲಿಯ ಹತ್ತಿರ ಗುರುತಿಸಿದ್ದಾರೆ.

ಈವರೆಗೆ ಉತ್ತರ ಕನ್ನಡಜಿಲ್ಲೆಯಲ್ಲಿ ಒಂದೆರಡು ನೆಲೆಗಳಲ್ಲಿ ಮಾತ್ರ ಬೃಹತ್-ಶಿಲಾ ಸಂಸ್ಕೃತಿಯ ಅವಶೇಷಗಳು ದೊರೆತಿದ್ದು ಶಿರಳಗಿಯ ನೆಲೆ ಇನ್ನೊಂದು ಉದಾಹರಣೆಯಾಗಿದೆ. ಉತ್ತರಕನ್ನಡ ಜಿಲ್ಲೆಯಲ್ಲಿ ಬೃಹತ್ ಶಿಲಾಸಂಸ್ಕೃತಿ ಸಾಕಷ್ಟು ಪ್ರಮಾಣದಲ್ಲಿ ಪ್ರಚಲಿತವಿತ್ತೆಂಬುದಕ್ಕೆ ಈ ಸೂಚಕವಾಗಿದೆ. ಶಿರಳಗಿಯ ವಿಷಯವಾಗಿ ಹೆಚ್ಚಿನ ಸಂಶೋಧನೆ ಕೈಗೊಂಡರೆ ಇನ್ನೂ ಹೆಚ್ಚಿನ ವಿಷಯಗಳನ್ನು ಬೆಳಕಿಗೆ ತರಬಹುದೆಂಬುದು ನನ್ನ ಅನಿಸಿಕೆ.

**ಶಾಸನ:**

ಬೆಳ್ಳಟ್ಟಿಯಲ್ಲಿ ದೊರೆತ ಶಿಲಾಶಾಸನವು ಹಾನಗಲ್ಲ ಕದಂಬ ಮಾವುಲಿದೇವರಸನ ವಿವರಣೆ ನೀಡುತ್ತದೆ. ಇದರ ಕಾಲ ಶಕ 1020 ಬಹಳ ತ್ರುಟಿತವಾಗಿರುವದರಿಂದ ಹೆಚ್ಚಿನ ವಿಷಯಗಳು ತಿಳಿಯದು.

**ಕಲೆ ಮತ್ತು ವಾಸ್ತು ಶಿಲ್ಪ:**

ಮುಗ್ದೂರಿನಲ್ಲಿ ದೊರೆತ ವಿಷ್ಣು ಮತ್ತು ನರಸಿಂಹನ ಮೂರ್ತಿಯು ವಾಸ್ತು ಶಿಲ್ಪ ಶೈಲಿಯಲ್ಲಿ ಬಹಳ ಗಮನಾರ್ಹ, ಮಾಧವ ರೂಪದಲ್ಲಿನ ವಿಷ್ಣುವಿನ ಮೂರ್ತಿಯು ಚತುರ್ಭುಜನಾಗಿ ಸಮಭಂಗದಲ್ಲಿರುವ ದುಂಡು ಶಿಲ್ಪ. ಇಂತಹದೇ ಮೂರ್ತಿಯನ್ನು ಅ ಡಾ॥ ಸುಂದರವರು ಅಂಕೋಲಾ ತಾಲ್ಲೂಕಿನ ಸುಂಕೇರಿಯಲ್ಲಿ ಶೋಧಿಸಿದ್ದು ಇದರ ಕಾಲವನ್ನು ಕ್ರಿಶ 6ನೇಯ ಶತಮಾನವೆಂದು ಹೇಳಬಹುದು.

ಸುಖಾಸನದಲ್ಲಿ ಕುಳಿತಿರುವ ದ್ವಿಬುಜ ನರಸಿಂಹನು ಬಲಗಾಲನ್ನು ಪೀಠದ ಮೇಲೆ ಊರ್ಧ್ವವಾಗಿಯೂ ಎಡಗಾಲನ್ನು ಅಡ್ಡಲಾಗಿ ಮಡಚಿದ್ದಾನೆ. ಬಲಗೈಯನ್ನು ಮೊಣಕಾಲ ಮೇಲೆ ಸಡಿಲವಾಗಿ ಬಿಟ್ಟು, ಬಿಚ್ಚಿದ ಎಡಗೈಯನ್ನು ತೊಡೆಯ ಮೇಲೆ ಊರಿದ್ದಾನೆ. ಈ ನರ ಸಿಂಹ ವಿಗ್ರಹವು ಬಿದನೂರು, ಕುಪ್ಪಗದ್ದೆ, ಹಲಸಿ, ಬೆಂಗಣೆ, ಕಾರಗಲ್ ಮೊದಲಾದ ಸ್ಥಳದಲ್ಲಿ ದೊರೆತ ಒಂದೆರಡು ಆಭರಣಗಳಿಂದ ಅಲಂಕೃತವಾದ ಸರಳ ಶೈಲಿಯ ವಿಗ್ರಹಕ್ಕೆ ಹೋಲುತ್ತದೆ. ಇವೆಲ್ಲದರ ಆಧಾರದ ಮೇಲೆ ಈ ಮೂರ್ತಿಯ ಕಾಲಮಾನ ಕ್ರಿಶ 5-6ನೇ ಶತಮಾನವೆಂದು ತರ್ಕಿಸಬಹುದು.

ಸಿದ್ದಾಪುರದ ಜೌರಗುಪ್ಪದಲ್ಲಿ ದೊರೆತಿರುವ ದುರ್ಗಾಮೂರ್ತಿಗಳು ವೈಶಿಷ್ಟ್ಯಪೂರ್ಣವಾಗಿವೆ. ಇಲ್ಲಿ ಒಟ್ಟು 6 ದುರ್ಗಾಮೂರ್ತಿಗಳು ದೊರೆತಿದ್ದು ಒಂದಕ್ಕೊಂದು ಅತೀ ಹತ್ತಿರದ ಸಾಮ್ಯ ವನ್ನು ಹೊಂದಿದೆ. ಕುಳಿತಿರುವ ಈ ದುರ್ಗಾವಿಗ್ರಹಗಳ ಪೀಠದ ಮೇಲೆ ಪ್ರೇತವಿರುವದರಿಂದ ಇದು ಸ್ಮಶಾನದುರ್ಗೆ ಆಗಿರುವ ಸಾಧ್ಯತೆ ಇದೆ. ಈ ವಿಗ್ರಹಗಳಲ್ಲಿ ಒಂದೆರಡು ರೌದ್ರಾಕಾರವಾಗಿ ಕಣ್ಣನ್ನು ತೆರೆದಿವೆ. ಇವೆಲ್ಲವೂ ಸುಮಾರು ಒಂದೇ ಕಾಲಕ್ಕೆ ಅನ್ವಯಿಸುವದರಿಂದ ಮತ್ತು ಒಂದೇ ಕಡೆಯಲ್ಲಿ ಇರುವುದು ವೈಶಿಷ್ಟ್ಯಪೂರ್ಣವಾಗಿದೆ. ಅಲ್ಲದೇ ಇದು ಮೂರ್ತಿಗಳನ್ನು ತಯಾರಿಸುವ ಕೇಂದ್ರ ಸ್ಥಳವಾಗಿತ್ತೇ? ಎಂಬ ಪ್ರಶ್ನೆಯು ಉದ್ಭವಿಸುತ್ತದೆ. ಅಥವಾ ಸಪ್ತ ಮಾತೃಕೆಯ ಗುಂಪಿಗೆ ಸೇರಿತ್ತೆ? ಒಂದು ವೇಳೆ ಸಪ್ತ ಮಾತೃಕೆಯ ಗುಂಪಿಗೆ ಸೇರಿದ್ದರೆ ಒಂದೇ ವಿಧವಾಗಿ ಎಲ್ಲ ಮೂರ್ತಿಗಳನ್ನು ಯಾಕೆ ಕೆತ್ತುತ್ತಿದ್ದರು? ಅಥವಾ ಸಪ್ತಮಾತೃಕೆಯರನ್ನು ಬೇರೆ ಬೇರೆ ರೂಪದಲ್ಲಿ ಕೆತ್ತು ತ್ತಿದ್ದ ಕಾಲಮಾನದ ನಂತರ ಕೇವಲ ಗುಪ್ಪೆ-ಗುಪ್ಪೆ ಯಾಗಿ ತೋರಿಸುತ್ತಿದ್ದುದರ ನಡುವಿನ ಒಂದು ವಿಧ ವಾಗಿರಬಹುದೇ? ಇವೆಲ್ಲ ಪ್ರಶ್ನೆಗೆ ಉತ್ತರ ಇನ್ನು ಹುಡುಕಬೇಕಾಗಿದೆ.

ಬೆಳ್ಳಟ್ಟಿಯಲ್ಲಿ ದೊರೆತ ಸೂರ್ಯನ ಮೂರ್ತಿಯು ಕಲೆಯಲ್ಲಿ ಅಷ್ಟೇ ಸುಂದರವಾಗಿದ್ದು ರಥಾರೂಢನಾದ ಇವನ ರಥವನ್ನು ಅರುಣನು ಚಲಿಸುತ್ತಿದ್ದಾನೆ. ಸೂರ್ಯನ ಕೊರಳಲ್ಲಿ ತೋರುವ ವನಮಾಲೆ ಈ ಶಿಲ್ಪದ ಮುಖ್ಯ ಲಕ್ಷಣ. ಇಂತಹ ವನಮಾಲೆಯು ಉತ್ತರಭಾರತದ ಶಿಲ್ಪಶೈಲಿ ಯಲ್ಲಿ ಸಾಮಾನ್ಯ. ಈ ಮೂರ್ತಿಯಲ್ಲಿ ಉತ್ತರ ಭಾರತದ ಕಲಾಪ್ರಭಾವವನ್ನು ಕಾಣಬಹುದಾಗಿದೆ.

ಭಾರತೀಯ-ಇಸ್ಲಾಮ್ ಶೈಲಿಯಲ್ಲಿ ರಚಿಸಲ್ಪಟ್ಟ ನಾರಗುಡಿಯ ಶಿವಾಲಯ ಕೆಳದಿ ವಾಸ್ತುಶಿಲ್ಪದ ಒಂದು ವೈಶಿಷ್ಟ್ಯವಾಗಿದೆ. ಇದೇ ಕಾಲಮಾನಕ್ಕೆ ಸೇರಬಹುದಾದ ಶಿರಳಗಿಯ ವೀರಭದ್ರ ಹಾಗೂ ಗರುಡ ಉತ್ತಮ ಕಲಾಕೃತಿಗಳಲ್ಲೊಂದಾಗಿದೆ.

# ಆಧಾರ ಗ್ರಂಥಗಳು


ಗುರುರಾಜ ಭಟ್ಟ ಪಿ. 'ಸ್ಟಡೀಸ್ ಇನ್ ತುಳುವ ಹಿಸ್ಟ್ರಿ ಅಂಡ್ ಕಲ್ಚರ್' ಉಡುಪಿ 1975.

ಸುಂದರ ಅ. 'ಇತ್ತೀಚಿನ ಕೆಲವು ಮುಖ್ಯ ಪುರಾತತ್ವ ಶೋಧನೆಗಳು', 'ಕರ್ನಾಟಕ ಭಾರತಿ', ಸಂ.೮. ಸಂಚಿಕೆ-೭, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ 1976.

ಸುದರ ಅ. 'ಸಿದ್ಧರ ಮತ್ತು ಸುಂಕೇರಿ ಗ್ರಾಮಗಳಲ್ಲಿರುವ ಎರಡು ಅಪರೂಪದ ಶಿಲಾಮೂರ್ತಿಗಳು', 'ಕರ್ನಾಟಕ ಭಾರತಿ' ಸಂ.೨೨, ಸಂಚಿಕೆ-೩ ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ, 1990.